# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly, KOPPA-CHM. ಫೋನ್ : 114

೩ನೇ ವರ್ಷ 28ನೇ ಸಂಚಿಕೆ ಕೊಪ್ಪ 25-2-1990 ಭಾನುವಾರ ಬೆಲೆ 60 ಪೈಸೆ


ರೈತರ ಸಾಲ ಮನ್ನಾಕ್ಕೆ ಒತ್ತಾಯಿಸಿ ಭೂ ಬ್ಯಾಂಕಿಗೆ ಮುತ್ತಿಗೆ :

## 154 ಜನ ಸಿಪಿಐ ಬೆಂಬಲಿಗರ ಬಂಧನ

ಶೃಂಗೇರಿ : ಸಿಪಿಐ ನೇತೃತ್ವದ ಕರ್ನಾಟಕ ರಾಜ್ಯ ರೈತ ಸಂಘದ (ಎ. ಐ ಕೆ. ಎಸ್.) ಕರೆಯ ಮೇರೆಗೆ ಫೆ 19 ರಂದು ರೈತರ ಸಾಲ ಮನ್ನಾಕ್ಕಾಗಿ ಘೋಷಣೆಗಳೊಂದಿಗೆ 300 ಕ್ಕೂ ಹೆಚ್ಚು ಜನ ಪೇಟೆಯ ಬೀದಿಗಳಲ್ಲಿ ಮೆರವಣಿಗೆ ಮಾಡಿ, ಭೂ ಅಭಿವೃದ್ಧಿ ಬ್ಯಾಂಕಿಗೆ ಮುತ್ತಿಗೆ ಹಾಕಿದರು.

ಚಳುವಳಿಕಾರರನ್ನುದ್ದೇಶಿಸಿ, ರೈತರು ಮತ್ತು ಕಾರ್ಮಿಕರ ಪರಿಸ್ಥಿತಿಯ ಬಗ್ಗೆ ಕಲ್ಕುಳಿ ವಿಠಲ್‌ಹೆಗ್ಡೆ ಮತ್ತು ಕೊಪ್ಪದ ಸಿಪಿಐ ಕಾರ್ಯದರ್ಶಿ ಎಸ್. ಆರ್ ರಾಮಚಂದ್ರ ಮಾತನಾಡಿದರು. ನಂತರ ಬ್ಯಾಂಕಿಗೆ ಮುತ್ತಿಗೆ ಹಾಕಿದ ಚಳುವಳಿಗಾರರನ್ನು ಬಂಧಿಸಿ ಠಾಣೆಯಲ್ಲಿ ಬಿಡುಗಡೆ ಮಾಡಲಾಯಿತು.

ರೈತರ ಎಲ್ಲಾ ಸಾಲ ಮನ್ನಾ ಮಾಡಬೇಕು. ಶೇ. 4ರ ಬಡ್ಡಿಯಲ್ಲಿ ಹೊಸ ಸಾಲ ನೀಡಬೇಕು ಹಾಗೂ ಕೇಂದ್ರ, ರಾಜ್ಯ ಸರ್ಕಾರಗಳು ಚುನಾವಣೆ ಭರವಸೆಗಳನ್ನು ಈಡೇರಿಸಬೇಕು ಎಂದು ಚಳುವಳಿಗಾರರು ಒತ್ತಾಯಿಸಿದರು. ಶೃಂಗೇರಿಯ ಚರಿತ್ರೆಯಲ್ಲೇ ರೈತರು ಕಾರ್ಮಿಕರು ಒಟ್ಟಾಗಿ ಮಾಡಿದ ಮೊಟ್ಟ ಮೊದಲ ಚಳುವಳಿ ಇದಾಗಿತ್ತು.

## ಕೆ.ಪಿ.ಎ. ಧೋರಣೆಗೆ ಜಿಲ್ಲಾ ಪತ್ರಕರ್ತರ ಸಂಘದ ಖಂಡನೆ; ನಿರ್ಣಯ

ಚಿಕ್ಕಮಗಳೂರು : ಕರ್ನಾಟಕ ಪ್ಲಾಂಟರ್ಸ್ ಅಸೋಸಿಯೇಷನ್ (ಕೆ ಪಿ ಎ.) ಕಾಫಿ ಬೆಳೆಯ ಸಮಸ್ಯೆಗಳ ಬಗ್ಗೆ ಮಾಹಿತಿ ನೀಡಲು ರಾಜ್ಯ ಮಟ್ಟದ ಪತ್ರಕರ್ತರನ್ನು ಆಹ್ವಾನಿಸಿ ಜಿಲ್ಲೆಯ ಪತ್ರಕರ್ತರನ್ನು ಕಡೆಗಣಿಸಿರುವುದನ್ನು ಜಿಲ್ಲಾ ಪತ್ರಕರ್ತರ ಸಂಘ ತೀವ್ರವಾಗಿ ಖಂಡಿಸಿದೆ ಎಂದು ಅಧ್ಯಕ್ಷ ಜಿ. ವಿ ಚೂಡನಾಥ ಅಯ್ಯರ್ ತಿಳಿಸಿದ್ದಾರೆ.

ಈ ರೀತಿ ಜಿಲ್ಲೆಯ ಪತ್ರಕರ್ತರನ್ನು ಕಡೆಗಾಣಿಸುವ ಕೆ. ಪಿ. ಎ ಧೋರಣೆಯನ್ನು ವಿರೋಧಿಸಿ, ಕೆ.ಪಿ ಎ ಗೆ ಸಂಬಂಧಿಸಿದ ಯಾವುದೇ ಸುದ್ದಿಯನ್ನು ಪ್ರಕಟಿಸಬಾರದೆಂಬ ನಿಲುವನ್ನು ಸಂಘ ತೆಗೆದುಕೊಂಡಿರುವುದಾಗಿಯೂ ಅವರು ತಿಳಿಸಿದ್ದಾರೆ.

## ಜಿಲ್ಲೆಯ ಪರಿಸರ ಸಮಸ್ಯೆಗಳ ಪರಿಹಾರ ಕುರಿತು ಜನಪ್ರತಿನಿಧಿಗಳೊಡನೆ ಸಮಾಲೋಚನೆ

ಚಿಕ್ಕಮಗಳೂರು : ಜಿಲ್ಲೆಯ ಪರಿಸರ ಸಮಸ್ಯೆಗಳ ಪರಿಹಾರದ ಬಗ್ಗೆ, ಜಿಲ್ಲಾ ಮತ್ತು ಕೊಪ್ಪದ ಪರಿಸರ ಜಾಗೃತಿ ವೇದಿಕೆಗಳ ಆಶ್ರಯದಲ್ಲಿ ಸಮಾಲೋಚನಾ ಸಭೆಯೊಂದು ಫೆ. 20 ರಂದು ಇಲ್ಲಿ ನಡೆಯಿತು.

ಪ್ರಯೋಜನಕ್ಕಿಂತ ವಿನಾಶವೇ ಹೆಚ್ಚಾಗಿರುವ ಭದ್ರಾ ಮೇಲ್ದಂಡೆ ಯೋಜನೆ, ಪದೇ ಪದೇ ಸ್ಕೆಚ್ ಬದಲಾಯಿಸಿ ದಟ್ಟ ಕಾಡು ಲೂಟಿ ಮಾಡುವ ಗುಬ್ಬಗದ್ದೆಯಂಥ ಪ್ರಕರಣಗಳು, ಐತಿಹಾಸಿಕ ಮಹತ್ವದ ಕೊಪ್ಪದ ಕೋಟೆಗುಡ್ಡ, ನಿಸರ್ಗ ರಮಣೀಯ ಕೆಮ್ಮಣ್ಣುಗುಂಡಿಯ ಹೆಬ್ಬೆ ಜಲಪಾತ ಮುಂತಾದ ಪ್ರವಾಸಿ ಆಕರ್ಷಣೆಯ ತಾಣಗಳನ್ನೂ ಸಹ ರಾಕ್ಷಸ-ಪ್ರಭಾವಿಗಳು ಒತ್ತುವರಿ ಮಾಡಿಕೊಳ್ಳುತ್ತಿರುವುದು, ಅನಾದಿ ಕಾಲದಿಂದ ಹಳ್ಳಿಗಳ ಜಮೀನು ಮತ್ತು ಕುಡಿವ ನೀರಿಗೆ ಆಸರೆಯಾಗಿರುವ ತೊರೆ-ಕೆರೆಗಳನ್ನು ದೊಡ್ಡ ದೊಡ್ಡ ಭೂ ಮಾಲೀಕರು, ಪ್ಲಾಂಟರ್‌ಗಳು ಆಕ್ರಮಿಸಿಕೊಂಡು ಕಟ್ಟೆ-ಕೆರೆ ನಿರ್ಮಿಸಿಕೊಳ್ಳುವುದು, ಸೊಪ್ಪಿನ ಬೆಟ್ಟ-ಗೋಮಾಳ-ಸಿ ಮತ್ತು ಡಿ ಭೂಮಿ ಸಮಸ್ಯೆಗಳು, ಜಲ ಮಾಲಿನ್ಯ ನಿಯಂತ್ರಣ-ಇವೇ ಮುಂತಾದ ಹತ್ತು-ಹಲವು ಸಮಸ್ಯೆಗಳನ್ನು ಚರ್ಚಿಸಿ, ಹಲವಾರು ಒತ್ತಾಯಗಳನ್ನೂ, ಸಲಹೆಗಳನ್ನೂ ಮಾಡಲಾಯಿತು.

ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆಗಳಿಗೆ ಕೋರ್ಟ್ ಶುಲ್ಕದ ವಿನಾಯ್ತಿ ನೀಡಿ, ಈ ಸೌಲಭ್ಯ ವೃಥಾ ದುರುಪಯೋಗವಾಗದಂತೆ ರಕ್ಷಣಾತ್ಮಕ ಕ್ರಮ ಅಳವಡಿಸಬೇಕೆಂದೂ ಸರ್ಕಾರವನ್ನು ಒತ್ತಾಯಿಸಲಾಯಿತು.

### ಏಲಕ್ಕಿ

ಸಕಲೇಶಪುರದಲ್ಲಿ ಏಲಕ್ಕಿ ಧಾರಣೆ ಸ್ಥಿರವಾಗಿ ಮುಂದುವರಿದಿದ್ದು, 300 ರೂ.ವರೆಗೆ ನಡೆಯುತ್ತಿದೆ ಎಂದು ಮಂಡಳಿ ಅಧಿಕಾರಿ ತಿಳಿಸಿದ್ದಾರೆ. ಈ ವಾರ ಕೊಪ್ಪದಲ್ಲಿ ವ್ಯಾಪಾರ ನಡೆದಿಲ್ಲ.

## ದಿ| ದ್ಯಾವೇಗೌಡ ಸ್ಮಾರಕ ಕ್ರಿಕೆಟ್ ಟೂರ್ನಿಯಲ್ಲಿ ಶಿವಮೊಗ್ಗ ತಂಡಕ್ಕೆ ಪ್ರಶಸ್ತಿ

ಕೊಪ್ಪ : ಇಲ್ಲಿನ ಫ್ರೆಂಡ್ಸ್ ಕ್ರಿಕೆಟ್ ಅಸೋಸಿಯೇಶನ್ ಆಶ್ರಯದಲ್ಲಿ ಜ. 30 ರಿಂದ ಫೆ 7ರವರೆಗೆ ನಡೆದ ದಿ| ಎಂ.ಎಸ್. ದ್ಯಾವೇಗೌಡ ಸ್ಮಾರಕ ಅಂತರ ಜಿಲ್ಲಾ ಮಟ್ಟದ ಆಹ್ವಾನಿತ ನಿಗದಿತ ಓವರ್ ಕ್ರಿಕೆಟ್ ಟೂರ್ನಿಯ ಫೈನಲ್‌ನಲ್ಲಿ ಶಿವಮೊಗ್ಗದ ಮೆಗ್ಗಾನ್ಸ್ ತಂಡ ಆತಿಥೇಯ ತಂಡವನ್ನು 5 ವಿಕೆಟ್‌ಗಳಿಂದ ಸೋಲಿಸಿ ಪ್ರಶಸ್ತಿ ಪಡೆಯಿತು ಶಿವಮೊಗ್ಗ ತಂಡದ ಗುರುದತ್ 'ಸರಣಿ ಶ್ರೇಷ್ಠ' ಹಾಗೂ ಕೊಪ್ಪದ ಕೆ. ಎಸ್. ಫಾಲಚಂದ್ರ ಉತ್ತಮ ಬ್ಯಾಟ್ಸ್‌ಮನ್ ಪ್ರಶಸ್ತಿ ಪಡೆದರು.

ಶಾಸಕ ಶಾಮಣ್ಣನವರ ಅಧ್ಯಕ್ಷತೆಯಲ್ಲಿ ನಡೆದ ಮುಕ್ತಾಯ ಸಮಾರಂಭದಲ್ಲಿ ಎಂ. ಡಿ ಬಾಲಕೃಷ್ಣ ಬಹುಮಾನ ವಿತರಿಸಿದರು. ತಹಸೀಲ್ದಾರ್ ಜಿ. ಎಸ್. ನಾಯಕ್ ಮುಖ್ಯ ಅತಿಥಿಯಾಗಿದ್ದರು.

## ಫಾಲಚಂದ್ರ 89 ರನ್ : ಫ್ರೆಂಡ್ಸ್ ತಂಡಕ್ಕೆ ಜಯ

ಕೊಪ್ಪ : ಇಲ್ಲಿನ ಫ್ರೆಂಡ್ಸ್ ಕ್ರಿಕೆಟ್ ಅಸೋಸಿಯೇಶನ್ ತಂಡ ಶೃಂಗೇರಿಯಲ್ಲಿ ನಡೆದ ಜಿಲ್ಲಾ ಮಟ್ಟದ ಆಹ್ವಾನ ನಿಗದಿತ ಓವರ್ ಕ್ರಿಕೆಟ್ ಟೂರ್ನಿಯಲ್ಲಿ ತೀರ್ಥಹಳ್ಳಿಯ ಸಿಟಿ ಕ್ರಿಕೆಟರ್ಸ್ ಮೇಲೆ 5 ವಿಕೆಟ್‌ಗಳಿಂದ ಜಯ ಗಳಿಸಿತು. ವಿಜಯಿ ತಂಡದ ಕೆ ಎಸ್. ಫಾಲಚಂದ್ರ 89, ಸುಧೀರ್ 35 ಮತ್ತು ಇಮ್ತಿಯಾಜ್ ಔಟಾಗದೆ 37 ರನ್ ಹೊಡೆದರು.

## ಶೃಂಗೇರಿ ಕಾಲೇಜಿನ ಸಂಭ್ರಮದ ಬೆಳ್ಳಿ ಹಬ್ಬ

(ನಮ್ಮ ಪ್ರತಿನಿಧಿಯಿಂದ)

ಶೃಂಗೇರಿ : ಇಲ್ಲಿನ ಜೆ.ಸಿ ಬಿ ಎಂ. ಕಾಲೇಜು 25 ವರ್ಷಗಳನ್ನು ಪೂರೈಸಿದ ಸವಿನೆನಪಿಗಾಗಿ ಫೆ. 16ರಿಂದ 3 ದಿನಗಳ ಕಾಲ ಸಂಭ್ರಮದ ಬೆಳ್ಳಿ ಹಬ್ಬವು ಕಾಲೇಜು ದಿನ ಮತ್ತು ಹಳೇ ವಿದ್ಯಾರ್ಥಿಗಳ ದಿನಾಚರಣೆಯನ್ನೊಳಗೊಂಡು ನೆರವೇರಿತು.

ಹರಿಹರಪುರ ಮಠಾಧೀಶರ ಅಧ್ಯಕ್ಷತೆಯಲ್ಲಿ ನಡೆದ ಬೆಳ್ಳಿ ಹಬ್ಬ ಸಮಾರಂಭವನ್ನು ಮಣಿಪಾಲದ ರಮೇಶ್ ಪೈ ಉದ್ಘಾಟಿಸಿದರು. ಶಾಸಕ ಯು ಕೆ. ಶಾಮಣ್ಣ ಮುಖ್ಯ ಅತಿಥಿಗಳಾಗಿದ್ದರು.

ಹಳೇ ವಿದ್ಯಾರ್ಥಿಗಳ ದಿನಾಚರಣೆಯಲ್ಲಿ ಹಳೇ ವಿದ್ಯಾರ್ಥಿಗಳಾದ ಬೆಂಗಳೂರಿನ ವಿ ಜಿ.ಪಿ ರವೀಂದ್ರನಾಥ ಟಾಗೋರ್ ಮತ್ತು ಹಾಸನದ ಸಿವಿಲ್ ಜಡ್ಜ್ ಎಂ.ಜಿ ಸುಧೀಂದ್ರ ಮುಖ್ಯ ಅತಿಥಿಗಳಾಗಿದ್ದರು. ಪ್ರಿನ್ಸಿಪಾಲ್ ಎಂ. ಕೃಷ್ಣಪ್ಪಯ್ಯ ಅಧ್ಯಕ್ಷತೆ ವಹಿಸಿದ್ದರು. ಅಲ್ಲದೆ, ಜ್ಞಾನ ಪೀಠ ಪ್ರಶಸ್ತಿ ವಿಜೇತ ಕುವೆಂಪುರವರ ಸಾಹಿತ್ಯ ವಿಚಾರಗೋಷ್ಠಿಯೂ ನಡೆಯಿತು.

### ಕೃತಜ್ಞತೆಗಳು

ಫೆಬ್ರವರಿ 23 ರಂದು ಶಿವರಾತ್ರಿ ಪ್ರಯುಕ್ತ ಏರ್ಪಡಿಸಿದ್ದ ವಿಶೇಷ ಪೂಜಾದಿ ಸಮಾರಂಭಗಳು ವಿಜೃಂಭಣೆಯಿಂದ ನೆರವೇರಲು ಸಹಕರಿಸಿದ ಎಲ್ಲಾ ಭಕ್ತಾಭಿಮಾನಿಗಳಿಗೆ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ವ್ಯವಸ್ಥಾಪಕರು,
ಶಿವಾಲಯ, ಕೊಪ್ಪ.

# ಚಿಕ್ಕಮಗಳೂರು ಜಿಲ್ಲೆಯ ಮಳೆಕಾಡುಗಳ ಬಗ್ಗೆ ಸಮಗ್ರವಾದ ಒಂದು ಅಪೂರ್ವ ವೈಜ್ಞಾನಿಕ ಅಧ್ಯಯನ

**ಶೃಂಗೇರಿಯ ಜೆ.ಸಿ.ಬಿ.ಎಂ. ಕಾಲೇಜಿನ ಸಂಶೋಧಕರಾದ ಡಾ|| ಎಚ್ ರಾಮಚಂದ್ರಸ್ವಾಮಿ ಮತ್ತು ಶ್ರೀಮತಿ ಶೈಲಜಾ ಚಂದ್ರಶೇಖರ್ ಇವರುಗಳು 1984 ರಿಂದ 89ರವರೆಗೆ ಚಿಕ್ಕಮಗಳೂರು ಜಿಲ್ಲೆಯ ಮಳೆ ಕಾಡುಗಳ ಬಗ್ಗೆ ಹಿಂದೆಂದೂ ನಡೆಯದಿದ್ದಂತಹ ಅಮೂಲಾಗ್ರ ವೈಜ್ಞಾನಿಕ ಅಧ್ಯಯನವೊಂದನ್ನು ನಡೆಸಿದ್ದಾರೆ. ಈ ಅಧ್ಯಯನ ದೇಶ ವಿದೇಶಗಳ ಅರಣ್ಯ ವಿಜ್ಞಾನಿಗಳಿಂದ ಹಾಗೂ ಭಾರತ ಸರ್ಕಾರದಿಂದ ಮುಕ್ತ ಪ್ರಶಂಸೆ ಗಳಿಸಿದೆ ಕರ್ನಾಟಕ ಸರ್ಕಾರ ಹಾಗೂ ಭಾರತ ಸರ್ಕಾರದ ಪರಿಸರ ಇಲಾಖೆ ಈ ಅಧ್ಯಯನಕ್ಕೆ ಅನುದಾನ ನೀಡಿದ್ದವು.**

**ಆದರೆ ಈ ಅಧ್ಯಯನದಿಂದ ಪಡೆದಿರುವ ಅಮೂಲ್ಯ ಮಾಹಿತಿ ಮತ್ತು ಫಲಿತಾಂಶಗಳನ್ನು ಇದೇ ಸರ್ಕಾರಗಳು ಹೇಗೆ ಬಳಸಿಕೊಳ್ಳುತ್ತವೆಯೋ— ಕಾದು ನೋಡಬೇಕಿದೆ.**

ಶೋಷಣೆಗೊಳಗಾಗಿರುವ ಪಶ್ಚಿಮ ಘಟ್ಟಗಳ ಮಳೆಕಾಡುಗಳ ಬಗ್ಗೆ ಜನರಲ್ಲಿ ಇತ್ತೀಚೆಗೆ ಕಾಳಜಿ ಹೆಚ್ಚುತ್ತಿರುವುದು ಸಂತಸದ ಸಂಗತಿ. ಅರಣ್ಯ ಸಿರಿ ಸಂಪೂರ್ಣವಾಗಿ ನಾಶವಾಗುವುದರ ಮೊದಲೇ ಅದರ ಬಗ್ಗೆ ವೈಜ್ಞಾನಿಕ ಮಾಹಿತಿ ಸಂಗ್ರಹಿಸಿ ದಾಖಲಿಸುವ ಪ್ರಯತ್ನಗಳೂ ನಡೆಯುತ್ತಿರುವುದು ಗಮನಾರ್ಹ. ಈ ದಿಸೆಯಲ್ಲಿ ಶೃಂಗೇರಿಯ ಜೆ. ಸಿ. ಬಿ. ಎಂ. ಕಾಲೇಜು ಚಿಕ್ಕಮಗಳೂರು ಜಿಲ್ಲೆಯ ಅರಣ್ಯಗಳನ್ನು ಕಳೆದ 5 ವರ್ಷಗಳಿಂದ ಅಧ್ಯಯನ ಮಾಡುತ್ತಿದೆ.

ಅರಣ್ಯಗಳನ್ನು ಭಾಗಶಃ ಅಥವಾ ಪೂರ್ಣವಾಗಿ ಕಡಿಯುವುದರ ದುಷ್ಪರಿಣಾಮಗಳನ್ನು—ಎಂದರೆ ಸಸ್ಯ ಸಂಪತ್ತು ಮತ್ತು ಮಣ್ಣಿನ ಸಾರ ಹೇಗೆ ಬದಲಾಗುತ್ತದೆ ಎಂಬುದನ್ನು—1984ರಿಂದ 1987ರವರೆಗೆ ಕರ್ನಾಟಕ ಸರ್ಕಾರದ ಅನುದಾನ ಪಡೆದು ಅಧ್ಯಯನ ಮಾಡಲಾಯಿತು. ಜಿಲ್ಲೆಯಲ್ಲಿರುವ ವಿವಿಧ ಸಹಜ ಅರಣ್ಯಗಳು, ಸೋಲಾ ಕಾಡು, ಹುಲ್ಲುಗಾವಲು ಹಾಗೂ ಕಾಡು ಕಡಿದು ಬರಡಾದ ಸ್ಥಳಗಳಲ್ಲಿ ಅರಣ್ಯ ಇಲಾಖೆ ಬೆಳೆಸಿದ ತೇಗ, ಅಕೇಸಿಯ ಹಾಗೂ ನೀಲಗಿರಿಯಂಥ ಏಕಸಸ್ಯ ಕಾಡುಗಳು— ಇವುಗಳ ಸಂಪತ್ ಸೃಜನ ಸಾಮರ್ಥ್ಯ, ಸಸ್ಯ ವೈವಿಧ್ಯ, ಮಣ್ಣಿನ ಗುಣ ಲಕ್ಷಣಗಳು, ಸಾರಚಕ್ರ ಕ್ರಿಯೆಗಳು ಹಾಗೂ ಭೂಜಲ-ಅಂತರ್ಜಲಗಳ ವೈಜ್ಞಾನಿಕ ಅಧ್ಯಯನವನ್ನು ಭಾರತ ಸರ್ಕಾರದ ಪರಿಸರ ಇಲಾಖೆಯ ಅನುದಾನವನ್ನು ಪಡೆದು 1986ರಿಂದ 1989 ರವರೆಗೆ ನಡೆಸಲಾಯಿತು.

ಈ ಎರಡೂ ಅಧ್ಯಯನಗಳನ್ನು ನಡೆಸಿ ವರದಿಯೊಪ್ಪಿಸಿದವರು ಜೆ ಸಿ. ಬಿ. ಎಂ. ಕಾಲೇಜಿನ ರಸಾಯನ ಶಾಸ್ತ್ರ ವಿಭಾಗದ ಡಾ||ಎಚ್. ರಾಮಚಂದ್ರಸ್ವಾಮಿ ಹಾಗೂ ಅವರ ತಂಡದ ಸಹ ವಿಜ್ಞಾನಿ ಶ್ರೀಮತಿ ಶೈಲಜಾ ಚಂದ್ರಶೇಖರ್ ಇವರುಗಳು. ಅಧ್ಯಯನದ ಬಗ್ಗೆ ಭಾರತ ಸರ್ಕಾರದ ಮುಕ್ತ ಪ್ರಶಂಸೆ ಇವರಿಗೆ ದೊರೆತಿದೆ. ಇದಲ್ಲದೆ ಗೌರವಾನ್ವಿತ ಅರಣ್ಯ ವಿಜ್ಞಾನಿಗಳಾದ ಬ್ರಿಟನ್ನಿನ ಜಾನ್ ಪ್ರಾಕ್ಟರ್; ಅಮೆರಿಕದ ಸ್ಮಿತ್ ಸೋನಿಯನ್ ಅರಣ್ಯ ಅಧ್ಯಯನ ಸಂಸ್ಥೆಯ ಜೋಸೆಫ್ ರೈಟ್ ಮತ್ತು ಇತರರು ಡಾ|| ರಾಮಚಂದ್ರಸ್ವಾಮಿ ಮತ್ತು ಸಂಗಡಿಗರು ನಡೆಸಿರುವ ಸಂಶೋಧನೆಯನ್ನು ಮೆಚ್ಚಿ ಬರೆದಿರುವುದಲ್ಲದೆ, ಸ್ಮಿತ್ ಸೋನಿಯನ್ ಸಂಸ್ಥೆಗೆ ಭೇಟಿ ನೀಡಲು ಆಮಂತ್ರಿಸಿದ್ದಾರೆ.

ಈ ಅಧ್ಯಯನವು ಈವರೆಗೆ ಕರ್ನಾಟಕದಲ್ಲಿ ಕೈಗೊಳ್ಳದೇ ಇದ್ದಂಥ ನವ್ಯ ರೀತಿಯದಾಗಿದ್ದು ಭಾರತೀಯ ವಿಜ್ಞಾನ ಮಂದಿರದ ಖ್ಯಾತ ಪರಿಸರ ವಿಜ್ಞಾನಿಗಳಾದ ಪ್ರೊ|| ಮಾಧವ ಗಾಡಗೀಳ್ ಮತ್ತು ಫಾದರ್ ಸಾಲ್ಡಾನಾ ಇವರ ಮಾರ್ಗದರ್ಶನದಲ್ಲಿ ನಡೆದಿದೆ. ಚಿಕ್ಕಮಗಳೂರು ಜಿಲ್ಲೆಯ ಸಸ್ಯ ಸಂಪತ್ತೆಂದು ಈವರೆಗೆ ಪ್ರಕಟವಾಗದಿರುವ 207 ವಿಭಿನ್ನ ಸಸ್ಯ ಜಾತಿಗಳನ್ನೊಳಗೊಂಡು ಒಟ್ಟು ಸುಮಾರು 2250 ಸಸ್ಯಗಳ ಸಂಗ್ರಹ ಮಾಡಲಾಗಿದೆ. ಇವುಗಳಲ್ಲಿ 254 ಜಾತಿಯ ಮರಗಳೂ, 319 ಮೂಲಿಕೆಗಳೂ, 129 ಬೀಳುಗಳೂ, 122 ಗಿಡಗಳೂ ಸೇರಿವೆ. ನಮ್ಮ ಮಳೆಕಾಡುಗಳ ಸಂಪತ್ ಸೃಜನ ಶಕ್ತಿ ಉಷ್ಣವಲಯದ ಇನ್ನಾವುದೇ ದೇಶದ ಮಳೆಕಾಡುಗಳದ್ದಕ್ಕಿಂತ ಕಡಿಮೆಯಲ್ಲವೆಂದು ಅಧ್ಯಯನ ತೋರಿಸಿಕೊಟ್ಟಿದೆ. (ಈ ಹಿಂದೆ ಭಾರತದ ಪಶ್ಚಿಮ ಘಟ್ಟಗಳ ಅರಣ್ಯಗಳು ಆಫ್ರಿಕದ ಅಥವಾ ದಕ್ಷಿಣ ಅಮೆರಿಕಾದ ಅರಣ್ಯಗಳಿಗಿಂತ ಕಡಿಮೆ ಸೃಜನಶಕ್ತಿಯುಳ್ಳವೆಂದು ಭಾವಿಸಲಾಗಿತ್ತು.)

ಮಳೆಕಾಡುಗಳಲ್ಲಿ ಸಾರಚಕ್ರ ಕ್ರಿಯೆಗಳು ಚುರುಕಾಗಿದ್ದು, ಉದುರಿದ ಎಲೆಗಳು ಕೆಲವೇ ದಿನಗಳಲ್ಲಿ ಜೀರ್ಣವಾಗಿ ಸಾರವು ಮಣ್ಣಿನಲ್ಲಿಳಿಯುವ ಮೊದಲೇ ಬೇರುಗಳ ಮೂಲಕ ಪುನಃ ಮೇಲೇರುವುದರಿಂದ, ಒಟ್ಟು ಜೀವದ್ರವ್ಯದ ಬಹು ಭಾಗ ಮರಗಳ ರೂಪದಲ್ಲಿಯೇ ಅಡಕವಾಗಿದ್ದು, ಹೆಮ್ಮರಗಳನ್ನು ಕಡಿದೊಯ್ಯುವುದೆಂದರೆ ಅಧಿಕಾಂಶ ಮಣ್ಣಿನ ಸಾರವನ್ನೂ ಸಾಗಿಸಿದ ಹಾಗೆಯೇ ಎಂಬುದನ್ನು ಈ ಅಧ್ಯಯನ ದೃಢಪಡಿಸಿದೆ. ಯಾವ ಯಾವ ಜಾತಿಯ ಮರಗಳಲ್ಲಿ ಯಾವ ಯಾವ ಸಾರ ಎಷ್ಟೆಷ್ಟಿರುತ್ತದೆ, ಮಣ್ಣಿನಲ್ಲಿ ಎಷ್ಟಿರುತ್ತದೆ ಇತ್ಯಾದಿ ವಿವರಗಳನ್ನು ರಾಸಾಯನಿಕವಾಗಿ ವಿಶ್ಲೇಷಿಸಲಾಗಿದೆ.

ಇದಲ್ಲದೆ, ಪ್ರಸಕ್ತ ತೇಗ, ಅಕೇಶಿಯಾ ನೀಲಗಿರಿ ಏಕಸಸ್ಯ ಕಾಡುಗಳ ಜೊತೆಜೊತೆಯ ಅಧ್ಯಯನವು ನೆಲವನ್ನು ಏಕಸಸ್ಯಮಯವನ್ನಾಗಿಸುವುದರ ದುಷ್ಪರಿಣಾಮಗಳನ್ನು ತೋರಿಸಿಕೊಡತ್ತದೆಯಲ್ಲದೆ ಇನ್ನು ಮುಂದೆ ಬರಡಾಗಿರುವ ಜಾಗಗಳಲ್ಲಿ ಹೊಸದಾಗಿ ಕಾಡನ್ನು ಬೆಳೆಸಬೇಕಾದರೆ ಆಯಾ ಪ್ರದೇಶಕ್ಕೆ ಸಹಜವಾದ ಮರಜಾತಿಗಳನ್ನು ಯಾವ ಯಾವ ಪ್ರಮಾಣದಲ್ಲಿ ಬೆಳೆಸುವುದು ಯೋಗ್ಯವಾಗಬಹುದೆಂದೂ ಅಧ್ಯಯನ ತೋರಿಸಿಕೊಡುತ್ತದೆ. ಒಟ್ಟಾಗಿ ಏಕಸ[...] ಅರಣ್ಯವನ್ನೇ ಅನಿವಾರ್ಯವಾಗಿ ಬೆ[...] ಬೇಕಾದಲ್ಲಿ, ಅನೇಕ ಅವಗುಣಗಳಿದ್ದಾಗ[...] ಅಕೇಶಿಯಾವೇ ನೀಲಗಿರಿಗಿಂತ ಒಳ್ಳೆ[...]ದೆಂದು ತಿಳಿದುಬರುತ್ತದೆ. ನೀಲಗಿರಿಯ[...] ಹೆಚ್ಚು ಮಳೆಯ ಪಶ್ಚಿಮಘಟ್ಟ ಪ್ರದೇಶ[...] ಯಾವ ರೀತಿಯಾಗಿಯೂ ಯೋಗ್ಯವ[...]ವೆಂದು ಅಧ್ಯಯನವು ತೋರಿಸಿಕೊಡುತ್ತ[...]

(3ನೇ ಪುಟಕ್ಕೆ)

## ಎಸ್ಸೆಸ್ಸೆಲ್ಸಿ ಪರೀಕ್ಷಾರ್ಥಿಗಳಿಗಾಗಿ ಜೀವಶಾಸ್ತ್ರ ಪ್ರಶ್ನೆಗಳು ಮತ್ತು ಉತ್ತರಗಳು

● ಕೆ. ಎಸ್. ರಾಮಕೃಷ್ಣ ಉಡುಪ

1. ಪ್ರ : ನರವ್ಯೂಹದ ಮೂರು ಬಗೆಯ ಘಟಕಗಳಾವುವು? (1 ½)
ಉ : ಗ್ರಾಹಕಗಳು, ಕಾರ್ಯನಿರ್ವಾಹಕಗಳು ಮತ್ತು ವಾಹಕಗಳು.

2 ಮನುಷ್ಯನ ಮುಮ್ಮಿದುಳಿನ ಎರಡು ಭಾಗಗಳನ್ನು ಮತ್ತು ಅವುಗಳ ಒಂದೊ[...] ಕಾರ್ಯವನ್ನು ತಿಳಿಸಿ. (2)
ಉ : (i) ಮಹಾಮಸ್ತಿಷ್ಕ (ಸೆರಿಬ್ರಂ) ಕಾರ್ಯ : ಐಚ್ಛಿಕ ಸ್ನಾಯುಗಳ ಚ[...]ಯನ್ನು ನಿಯಂತ್ರಿಸುತ್ತದೆ.
(ii) ಡೈಎನ್‌ಸೆಫೆಲಾನ್ ; ಕಾರ್ಯ : ನೀರಿನ ಸಮತೋಲನ, ಆಹಾರ[...] ಮೊದಲಾದ ಕ್ರಿಯೆಗಳನ್ನು ನಿಯಂತ್ರಿಸುತ್ತದೆ.

3. ಪರಾವರ್ತಿತ ಚಾಪ ಎಂದರೇನು? ಇದರ 5 ಭಾಗಗಳನ್ನು ಹೆಸರಿಸಿ. (2)
ಉ : ಪರಾವರ್ತಿತ ಪ್ರತಿಕ್ರಿಯೆ ಜರಗುವಾಗ ನರ ಸಂದೇಶವು ಹಾದು ಹೋ[...] ಮಾರ್ಗವೇ ಪರಾವರ್ತಿತ ಚಾಪ.
ಭಾಗಗಳು : ಗ್ರಾಹಕ, ಜ್ಞಾನವಾಹಿ ನರಕೋಶ, ಸಂಯೋಜಕ ನರಕೋ[...] ಕ್ರಿಯಾವಾಹಿ ನರಕೋಶ, ಕಾರ್ಯನಿರ್ವಾಹಕ.

4. ಮದ್ಯ ಕುಡಿದವನು ತೂರಾಡುತ್ತಾ ನಡೆಯಲು ಕಾರಣವೇನು ? (1)
ಉ : ಶರೀರದ ಸಮತೋಲನವನ್ನು ಕಾಪಾಡುವ 'ಮಿದುಳಿನ ಅನುಮಸ್ತಿ[...] (ಸೆರಿಬೆಲಂ) ಮೇಲೆ ಮದ್ಯವು ಕೆಟ್ಟ ಪರಿಣಾಮ ಉಂಟುಮಾಡುವುದರಿಂದ.

5. ಕಣ್ಣು ಗುಡ್ಡೆಯ ಮೂರು ಪದರಗಳಾವುವು ? (1 ½)
ಉ: ಸ್ಕ್ಲೀರಾಟಿಕ್, ಕೋರಾಯ್ಡ್ ಮತ್ತು ರೆಟಿನಾ

6. ಸಮೀಪ ದೃಷ್ಟಿ ಎಂದರೇನು? ಅದು ಹೇಗೆ ಉಂಟಾಗುತ್ತದೆ? ಅದನ್ನು [...] ನಿವಾರಿಸಬಹುದು? (1 ½)
ಉ : ಸಾಮಾನ್ಯ ಅಂತರಕ್ಕಿಂತ ಹತ್ತಿರದಲ್ಲಿರುವ ವಸ್ತುಗಳು ಸ್ಪಷ್ಟವಾಗಿ ಕಾಣು[...]ದಕ್ಕೆ ಸಮೀಪದೃಷ್ಟಿ ಎಂದು ಹೆಸರು.
ಕಾರಣ : ಕಣ್ಣುಗುಡ್ಡೆ ಹೆಚ್ಚು ಉದ್ದವಾಗಿರುವುದು ಅಥವಾ ಕಣ್ಣಿನ ಮ[...] ಹೆಚ್ಚು ಉಬ್ಬಿರುವುದು.
ನಿವಾರಣೆ: ನಿಮ್ನ ಮಸೂರ ಇರುವ ಕನ್ನಡಕವನ್ನು ಉಪಯೋಗಿಸುವುದು

7. ಹೆಚ್ಚು ನೆಗಡಿಯಾದಾಗ ಕಿವಿ ಸರಿಯಾಗಿ ಕೇಳಿಸದಿರಲು ಕಾರಣವೇನು (1[...]
ಉ : ಕರ್ಣಾಂತರ ನಾಳದಲ್ಲಿ ಶ್ಲೇಷ್ಮ ಕಟ್ಟಿಗುವುದರಿಂದ ಮಧ್ಯಕ ಕಿವಿಯಲ್ಲಿ ಗಾ[...] ಒತ್ತಡ ಹೊರ ಬದಿಗಿಂತ ಕಡಿಮೆಯಾಗುತ್ತದೆ ; ಕಿವಿಯ ತಮಟೆ ಸರಿ[...] ಕಂಪಿಸುವುದಿಲ್ಲ.

8. ಚರ್ಮವನ್ನು ಒಂದು ಜ್ಞಾನೇಂದ್ರಿಯ ಎಂದು ಕರೆಯಲು ಕಾರಣವೇನು?
ಉ : ಚರ್ಮದಲ್ಲಿ ಸ್ಪರ್ಶ, ಒತ್ತಡ, ಶಾಖ ಮೊದಲಾದ ಪ್ರಚೋದನೆಗಳನ್ನು [...]ಸಲು ನರಾಗ್ರಗಳಿವೆ.

9. ಇವುಗಳ ಕಾರ್ಯವನ್ನು ತಿಳಿಸಿ : (2)
ಎ) ಮಣಿಶಿರ (ಬಿ) ಕಣ್ಣಿನ ಪಾಪೆ (ಸಿ) ಒಳಕಿವಿಯ ಅರ್ಧಚಂದ್ರಾಕೃ[...] ನಾಳಗಳು (ಡಿ) ರಸಾಂಕುರಗಳು.
ಉ : (ಎ) ಅನೈಚ್ಛಿಕ ಸ್ನಾಯುಗಳ ಚಲನೆಯನ್ನು ನಿಯಂತ್ರಿಸುತ್ತದೆ.
(ಬಿ) ಬೆಳಕನ್ನು ನಿಯಂತ್ರಿಸಿ ಕಣ್ಣಿನ ಒಳಗಡೆಗೆ ಬಿಡುವುದು
(ಸಿ) ಶರೀರದ ಸಮತೋಲನವನ್ನು ಕಾಪಾಡುವುದು.
(ಡಿ) ರುಚಿಯನ್ನು ಗ್ರಹಿಸುವುದು,

10 ಇವುಗಳನ್ನು ಹೆಸರಿಸಿ. (2 ½)
(ಎ) ಮಿದುಳಿನ ಹತ್ತನೆ ನರ (ಬಿ) ಪ್ರತಿಯೋಜನ ಶಕ್ತಿ ಇರುವ ಕಣ್ಣಿನ[...] (ಸಿ) ಮಿದುಳನ್ನು ಆವರಿಸಿರುವ ಕವಚ (ಡಿ) ಕಣ್ಣಿನ ಎರಡು ಬಗೆ ಗ್ರಾ[...] ಕೋಶಗಳು.
ಉ : (ಎ) ವೇಗಸ್ ನರ (ಬಿ) ಕಣ್ಣಿನ ಮಸೂರ (ಸಿ) ಮೆನಿನ[...] (ಡಿ) ಕಂಬಿ ಮತ್ತು ಶಂಕು. (ಮುಂದುವರಿಯುವುದು)

## ಓದುಗರ ಪತ್ರಗಳು

# ಹಾಲ್ಮುತ್ತೂರು ಹೆಗ್ಗೆರೆ: ಸತ್ಯ ಸಂಗತಿಗಳು

ಪ್ರಿಯರೆ,

ಹಾಲ್ಮುತ್ತೂರು ಹೆಗ್ಗೆರೆ ವಿಚಾರವಾಗಿ ನಿರಾಧಾರವಾಗಿ ಆಪಾದನೆಗಳನ್ನು ಹೊರಿಸಲಾಗಿದೆ. ಈ ಬಗ್ಗೆ ಈ ಕೆಳಗಿನ ಕೆಲವು ಸತ್ಯ ಸಂಗತಿಗಳನ್ನು ತಿಳಿಸಲೇಬೇಕಾಗಿದೆ.

ಹಾಲ್ಮುತ್ತೂರ ಹೆಗ್ಗೆರೆ ಸುಮಾರು 200-300 ವರ್ಷಗಳ ಮೊದಲೇ ನಿರ್ಮಾಣ ಆಗಿರಬೇಕು 1921ರ ಒರಿಜಿನಲ್ ಸರ್ವೆ ಪ್ರಕಾರ ನಕಾಶೆಯಲ್ಲಿ ಈ ಕೆರೆ ಇದೆ, ಆಗ ತೂಬು ಇರಲಿಲ್ಲ. ಮೊದಲ ತೂಬು ಇಟ್ಟಿದ್ದು 1925ರಲ್ಲಿ ಆಗ ಕೆಳಗಿನ ತೋಟಕ್ಕೆ ನೀರು ಹಾಯಿಸಬಹುದೆಂಬ ಭ್ರಮೆಯಿಂದ ಸರಕಾರದ ವತಿಯಿಂದ ತೂಬನ್ನಿಡಿಸಿಕೊಂಡರು ಅದೂ ಸಾಕಾಗಲಿಲ್ಲವೆಂದು 1943ರಲ್ಲಿ ಮಧ್ಯದ ತೂಬನ್ನಿಟ್ಟರು. ಆದರಿಂದಲೂ ಪೂರ್ತಿ ತೋಟಕ್ಕೆ ನೀರು ಹಾಯಿಸಲು ಒಂದು ದಿನಕ್ಕೂ ಸಾಕಾಗಲಿಲ್ಲ.

(4ನೇ ಪುಟಕ್ಕೆ)

## ಎಸ್ಸೆಸ್ಸೆಲ್ಸಿ ಮಾದರಿ ಪ್ರಶ್ನೋತ್ತರ : ಉಪಯುಕ್ತ

ಪ್ರಿಯರೆ,

**18.2.1990ರ** ತಮ್ಮ ಪತ್ರಿಕೆಯಲ್ಲಿ ಅನುಭವಿ ಶಿಕ್ಷಕರಾಗಿ ಹರಿಹರಪುರದ ಶ್ರೀ ಕೆ. ಎಸ್. ಆರ್. ಉಡುಪರವರು ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಗಳಿಗಾಗಿ ಸಿದ್ಧಪಡಿಸಿದ 'ಜೀವಶಾಸ್ತ್ರದ ಸಂಕ್ಷಿಪ್ತ ಮಾದರಿ ಪ್ರಶ್ನೋತ್ತರ'ಗಳು ಪರೀಕ್ಷಾರ್ಥಿಗಳ ದೃಷ್ಟಿಯಿಂದ ತುಂಬಾ ಉಪಯುಕ್ತವಾಗಿದೆ. ಇನ್ನಿತರ ಅನುಭವಿ ಶಿಕ್ಷಕರಿಂದ ಉಳಿದ ವಿಷಯಗಳ ಬಗ್ಗೆಯೂ ಮಾದರಿ ಪ್ರಶ್ನೋತ್ತರ ಮೂಡಿ ಬಂದರೆ ಎಸ್ಸೆಸ್ಸೆಲ್ಸಿ ವಿದ್ಯಾರ್ಥಿಗಳಿಗೆ ತುಂಬಾ ಉಪಯುಕ್ತವಾದೀತು.

ಈ ದಿಶೆಯಲ್ಲಿ ಪ್ರೌಢಶಾಲೆಗಳ ಅನುಭವಿ ಶಿಕ್ಷಕರು ಕಾರ್ಯ ಪ್ರವೃತ್ತರಾಗಲಿ ಎಂದು ಆಶಿಸುತ್ತೇನೆ

**—ಶಂ. ನ. ಶೇಷಗಿರಿ**
ಜಯಪುರ.

## ಕೃತಿ ಚೌರ್ಯ

ಪ್ರಿಯರೆ,

ತಾ|| 18-2-90ರ ನಿಮ್ಮ ಪತ್ರಿಕೆಯಲ್ಲಿ ಬಿ. ವಿ. ಕುಮಾರ್‌ರವರ "ನಿನಗಾಗಿ ಕಾಯುತ್ತಿದ್ದೆ" ಪದ್ಯ ಈ ಹಿಂದೆ ಜೂನ್ 88ರ 'ಮಯೂರ'ದಲ್ಲಿ ಪ್ರಕಟವಾಗಿದ್ದ ಮಳಲಕೆರೆ ರುದ್ರೇಶ್ವರ ಸ್ವಾಮಿಯವರ ಕವನದ ನೇರ ಕೃತಿ ಚೌರ್ಯವಾಗಿರುತ್ತೆ. ಒಂದೆರಡು ಅಕ್ಷರಗಳ ಬದಲಾವಣೆ ಬಿಟ್ಟರೆ ಸಂಪೂರ್ಣ ಅದೇ ಕವನ.

ಕವನ ಬರೆಯಲು ಪ್ರಯತ್ನಿಸುವುದು ಪ್ರಗತಿಯ ಹಾದಿ. ಆದರೆ ಕೃತಿಚೌರ್ಯ ಅವನತಿಗೆ ದಾರಿ, ಅಲ್ಲವೆ?

**ಎಚ್.ಎಸ್. ಶಶಿಪ್ರಭಾ, ಹುಲ್ಗಾರ್.**

# ಕೆಸವೆ ರಸ್ತೆಗೆ ಟಾರು

ಪ್ರಿಯರೆ,

ನಮ್ಮ ರಸ್ತೆ ಟಾರ್ ಬಗ್ಗೆ ನನ್ನ ಅಭಿನಂದನೆ ಕುರಿತು ಕಳಸಪ್ಪ ಮತ್ತು ಇತರರ ಪ್ರತಿಕ್ರಿಯೆ ನೋಡಿದೆ. ('ಮುಂಜಾವು': 28-1-90)

ಎಚ್. ಡಿ. ದೇವೇಗೌಡರ ಆಶ್ವಾಸನೆಯ ವಿಚಾರವನ್ನಷ್ಟೇ ನಾನು ಬರೆದಿದ್ದೆ; ಮಾಜಿ ಶಾಸಕರ ಬಗ್ಗೆ ಯಾವುದೇ ವಿಚಾರ ಬರೆದಿರಲಿಲ್ಲ. ದೇವೇಗೌಡರು ಆಶ್ವಾಸನೆ ಕೊಟ್ಟ ನಂತರದ ಒಂದು ಕಿ.ಮೀ., ಅದರ ಮೊದಲಿನ 1 ಕಿ.ಮೀ. ಹಾಗೂ ಈಗಿನ ಒಂದು ಕಿ.ಮೀ. ಸೇರಿ ಕೆಸವೆ ರಸ್ತೆಯಲ್ಲಿ ಈವರೆಗೆ ಕೇವಲ 3 ಕಿ.ಮೀ. ಮಾತ್ರ ಟಾರ್ ಆಗಿದೆ.

ಈಗ ಆಗಿರುವ 1 ಕಿ.ಮೀ. ಟಾರಿಗೂ ನಮ್ಮ ರಸ್ತೆ ಲೋಕೋಪಯೋಗಿ ಇಲಾಖೆಯಲ್ಲಿದ್ದಾಗಲೇ ಮಂಜೂರಾಗಿ ಟೆಂಡರ್ ಕೂಡ ಆಗಿತ್ತು. ಆದರೆ ಹಣ ಇಲ್ಲದ್ದರಿಂದ ಯಾವುದೇ ಬಿಲ್ ಪಾಸಾಗುತ್ತಿರಲಿಲ್ಲವಾಗಿ

(4ನೇ ಪುಟಕ್ಕೆ)

# ಅಪೂರ್ವ ವೈಜ್ಞಾನಿಕ ಅಧ್ಯಯನ

(2ನೇ ಪುಟದಿಂದ)

ಭೂಜಲ ಹಾಗೂ ಅಂತರ್ಜಲ ಅಧ್ಯಯನವು ಅರಣ್ಯ ಪ್ರದೇಶದಲ್ಲಿ ಹೊಸದಾಗಿದ್ದು, ಸಂಗ್ರಹಿಸಲಾದ ಮಾಹಿತಿಯನ್ನು ಭಾರತೀಯ ವಿಜ್ಞಾನ ಮಂದಿರದಲ್ಲಿ ಇನ್ನೂ ವಿಶ್ಲೇಷಿಸಲಾಗುತ್ತಿದೆ. ಮಳೆ ಕೆಲವೇ ತಿಂಗಳು ಧಾರಾಕಾರವಾಗಿ ಸುರಿದುಹೋದ ವರ್ಷಗಳಲ್ಲಿ, ಬಿದ್ದ ನೀರಿನ ಅರ್ಧದಷ್ಟು ಬೇಗ ಮೇಲೆ ಹರಿದುಹೋಗಿಬಿಡುವುದೆಂದೂ, ಮಳೆ ಐದಾರು ತಿಂಗಳು ಹಂಚಿಕೆಯಾಗಿ ಬಿದ್ದ ವರ್ಷಗಳಲ್ಲಿ ಕೇವಲ ಶೇ. 10 ರಷ್ಟು ಹರಿದು ಹೋಗಿ ಉಳಿದದ್ದು ಅಂತರ್ಜಲವಾಗಿ ಸಸ್ಯಗಳಿಗೆ ದೊರೆಯುವುದೆಂದೂ ಅಧ್ಯಯನ ತೋರಿಸಿಕೊಟ್ಟಿದೆ.

ಅನೇಕಾನೇಕ ವೈಜ್ಞಾನಿಕ ವಿವರಗಳನ್ನೊಳಗೊಂಡಿರುವ ಅಧ್ಯಯನವು ವಿಭಿನ್ನ ರೀತಿಯ ಅರಣ್ಯಗಳಲ್ಲಿರುವ ವಿಭಿನ್ನ ಸಸ್ಯಗಳ ಪ್ರಮಾಣ, ಅವುಗಳ ದ್ಯುತಿ ಸಂಶ್ಲೇಷಣ ಸಾಮರ್ಥ್ಯ, ಅವು ಉದುರಿಸುವ ಎಲೆ, ಕಡ್ಡಿ, ಹೂ, ಹಣ್ಣು ಇತ್ಯಾದಿಗಳ ಪ್ರಮಾಣ, ಅವುಗಳಲ್ಲಿನ ವಿವಿಧ ಸಾರಗಳು, ವರ್ಷದ ಬೇರೆ ಬೇರೆ ತಿಂಗಳುಗಳಲ್ಲಿ ಅವುಗಳಲ್ಲಾಗುವ ಬದಲಾವಣೆ, ಮಣ್ಣಿನ ಪದರಗಳಲ್ಲಿ ಆಗುವ ಸಾರಾಂಶಗಳ ಬದಲಾವಣೆ ಇತ್ಯಾದಿ ಇತ್ಯಾದಿಗಳ ಬಗ್ಗೆ ವೈಜ್ಞಾನಿಕ ಮಾಹಿತಿಯನ್ನೊದಗಿಸುತ್ತದೆ.

ಸರ್ಕಾರವು ತಾನೇ ಪ್ರೋತ್ಸಾಹಿಸಿದ ಇಂಥ ಅಧ್ಯಯನವನ್ನು ಹೇಗೆ ಉಪಯೋಗಿಸಿಕೊಳ್ಳುವುದೋ ಕಾದು ನೋಡಬೇಕಾಗಿದೆ.

## ಕೆಸವೆ ರಸ್ತೆಗೆ ಟಾರು

(೨ನೇ ಪುಟದಿಂದ)

ಈ ಕೆಲಸ ಆಗಿರಲಿಲ್ಲ. ಈಚೆಗೆ ಜಿಲ್ಲಾ ಪರಿಷತ್ತಿನಿಂದ ಹಣ ಮಂಜೂರಾದ್ದರಿಂದಲೂ, ಈಗಿನ ಶಾಸಕರು ಗುತ್ತಿಗೆದಾರರ ಮೇಲೆ ಒತ್ತಡ ತಂದಿದ್ದರಿಂದಲೂ ಈಗ ಕೆಲಸ ಆಗಿದೆ.

ಗ್ರಾಮದ ಜೀವನಾಡಿಯಾದ ಈ ರಸ್ತೆಯ ಅಭಿವೃದ್ಧಿಯೇ ನನ್ನ ಗುರಿ ಹೊರತು ಬೇರೇನಲ್ಲ. ಪೂರ್ಣ ಜವಾಬ್ದಾರಿಯಿಂದಲೇ ಈ ಬಗ್ಗೆ ವ್ಯವಹರಿಸಿದ್ದೇನೆ.

— **ಕೆ. ಎಸ್. ಶಾಂತಾರಾಂ,**
ಬಿಂತ್ರವಳ್ಳಿ ಮಂಡಲ ಉಪ ಪ್ರಧಾನರು.

(ಈ ಪತ್ರ ವ್ಯವಹಾರವನ್ನು ಇಲ್ಲಿಗೆ ಮುಕ್ತಾಯಗೊಳಿಸಲಾಗಿದೆ. —**ಸಂ.**)

## ಶ್ರದ್ಧಾಂಜಲಿ

ಪ್ರಿಯರೆ,

ಸಾಮಾಜಿಕ-ಧಾರ್ಮಿಕ ಕ್ಷೇತ್ರಗಳ ಒಬ್ಬ ಹೃದಯ ಶ್ರೀಮಂತರಾಗಿದ್ದ ಎಲೆ-ಮಡಲು ಜನಾರ್ದನ ಹೆಬ್ಬಾರ್ ವಿಧಿವಶರಾಗಿದ್ದಾರೆ. ಬಸರಿಕಟ್ಟೆ ಪ್ರೌಢಶಾಲೆಯ ಕುಡಿವ ನೀರು ಯೋಜನೆ ಪೂರ್ಣವಾಗಲು ಅವರು ನೀಡಿದ ಮಾರ್ಗದರ್ಶನ, ನೆಂವು ನಿರಂತರ ಸ್ಮರಣೀಯ.

ದಿವಂಗತರ ಆತ್ಮಕ್ಕೆ ಸದ್ಗತಿಯನ್ನು ಕೋರುತ್ತೇವೆ.

—ಗುಡ್ಡೇತೋಟ ಸುಬ್ಬರಾವ್,
ಡಾ|| ಎ್.ಆರ್. ಶೆಟ್ಟಿ, ಪದಾಧಿಕಾರಿಗಳು
ಶ್ರೀ ಸದ್ಗುರು ವಿದ್ಯಾ ಸಮಿತಿ, ಬಸರಿಕಟ್ಟೆ.

## ಹೆಗ್ಗರೆ : ಕೆಲವು ಸತ್ಯ ಸಂಗತಿಗಳು

(3ನೇ ಪುಟದಿಂದ)

ಈ ತರಹ ನೀರು ಹಾಯಿಸುವಿಕೆ ಕೆರೆಯ ಅಚ್ಚುಕಟ್ಟು ಬಾಗಾಯ್ತು ಪ್ರದೇಶ ಅಂದರೆ ಉತ್ತಾರ ಕಾಪಿಯಲ್ಲಿರುವ ಪ್ರದೇಶಕ್ಕೆ ಮಾತ್ರ ಸೀಮಿತವಾಗಿದೆ. ಹೀಗೆ ಸಾಧ್ಯವಾಗದಾಗ, ಜೌಗು ನೀರಿಗೇ ತೃಪ್ತಿಪಟ್ಟುಕೊಳ್ಳಬೇಕಾಗಿದೆ. ಜೌಗು ನೀರು ಎಂದರೆ ಕೆರೆಯಲ್ಲಿ ನೀರಿದ್ದರಷ್ಟೆ.

ಹಿಂದೆ ಅಂತರ್ಜಲ ನೋಡಿ ಬಾವಿ ತೆಗೆಯುವ ಇಲಾಖೆ ಇರಲಿಲ್ಲ. ಈಗ ಹತ್ತು ವರ್ಷದಿಂದಷ್ಟೇ ಅಂತಹ ಇಲಾಖೆ ಇರುವುದನ್ನು ಕಾಣುತ್ತಿದ್ದೇವೆ ಅಂತರ್ಜಲ ನೋಡಿ ತೆಗೆಸಿದ ಹಾಲ್ಮುತ್ತೂರು ಜನತಾ ಕಾಲೋನಿಯ ಎಲ್ಲಾ ಬಾವಿ-ಬೋರ್ ವೆಲ್‌ಗಳೂ, ಹೋದ ವರ್ಷ ಕೆರೆ ಖಾಲಿ ಮಾಡಿದಾಗ ಒಣಗಿ ಬತ್ತಿ ಹೋಗಿದ್ದವು!

ಇನ್ನು "ಹೊಳೆಯಷ್ಟು ದೊಡ್ಡದಾದ" ಬಾಗಿ ಹಳ್ಳ ಕಳೆದ 2-3 ಬೇಸಿಗೆಗಳಲ್ಲಿ ತುಂಡಾಗಿ ಬತ್ತಿ ಹೋಗಿತ್ತು!

ನನಗೆ ಕೆರೆ ಮೇಲ್ಗಡೆ ದರಖಾಸ್ತು ಆದುದು 50 ವರ್ಷದ ಹಿಂದೆ ನಮ್ಮ ಅಜ್ಜನ ಕಾಲದಲ್ಲಿ. ಹೀಗೆ ಎಲ್ಲಾ ಕೆರೆ ಮೇಲ್ಗಡೆಯೂ ದರಖಾಸ್ತು ಆಗಿದೆ ನಮಗೆ ಮಾತ್ರ ಎಂದೇನಲ್ಲ. ಇನ್ನು "ಪ್ರಭಾವ ಬೀರಿ" ಆಗಳು ತೆಗೆಸಿದ ವಿಚಾರ. ಇದು 1948ರಲ್ಲಿ. ನಾಸಿನ್ನೂ ಚೇರ್‌ಮನ್ ಆಗಿರಲಿಲ್ಲ. ಆಗ ಲೋಕೋಪಯೋಗಿ ಇಲಾಖೆಯವರು ಕೆರೆಗೆ 'ಚೇರ್ ಡ್ರೈನ್' ತೆಗೆದು ನೀರನ್ನು ಕೆರೆಗೆ ತಂದುಬಿಟ್ಟಿದ್ದಾರೆ. ಇನ್ನು ಲೋಕೋಪಯೋಗಿ ರಸ್ತೆಗೆ ಮೋರಿ ಮಾಡಿಸಿದ್ದು 1952ರಲ್ಲಿ. ಆಗ ಎಲ್ಲಾ ಅಚ್ಚುಕಟ್ಟುದಾರರು ಕೆರೆ ಹೂಳು ತುಂಬುತ್ತೆಂದು ತಕರಾರು ಮಾಡಿದರು ಆಗ ನೀರನ್ನು ಕೋಡಿಗೆ ತಿರುಗಿಸಿ ಬಿಡುವ ಷರತ್ತಿನ ಮೇಲೆ ಸುಮ್ಮನಾದರು. ಆದರೆ ಈಗ ಆ ತರಹ ನೀರು ಬಿಡಲು ಆಗದೆ ಇಲಾಖೆಗೂ ತಲೆ ನೋವಾಗಿದೆ ಅಷ್ಟೆ ಹೊರತು, ಯಾರೂ ತಮ್ಮ ಗದ್ದೆಗೆ ತಾವೇ ಬೆರಳು ಹಾಕಿಕೊಳ್ಳುವುದಿಲ್ಲ.

ಕೋಡಿ ಮುಚ್ಚುವಷ್ಟು ಯಾರೂ ದಡ್ಡರಿಲ್ಲ. ಅದೂ ಸಾಲದೆ 4 ವರ್ಷದ ಹಿಂದೆ ಕೆರೆ ನೀರು ಬಿಟ್ಟು ಗದ್ದೆ ಸಾಗುವಳಿ ಮಾಡಬಾರದೆಂದು ಎಲ್ಲಾ ಗದ್ದೆ ಬೆಳೆಗಾರರಿಗೂ ನೋಟೀಸು ಕೊಟ್ಟಿದ್ದಾರೆ ಈಗ ಕೇವಲ 2-[illegible] ಜನ ಸಾಗುವಳಿ ಮಾಡುತ್ತಿದ್ದು... ಅವ[illegible] ಬಗೆಗೂ ಹೋದ ವರ್ಷ ಮಂಡಲ ಪಂಚಾಯ್ತಿಯವರು ಪೋಲೀಸ್ ಕಂಪ್ಲೇಂಟ್ ಕೊಟ್ಟಿದ್ದಾರೆ ಅಂತೂ 34 ಎಕ್ರೆ ಬಾಗಾಯ್ತುದಾರರಲ್ಲಿ 10-20 ಗುಂಟೆ ಹೊಂದಿದವರೂ ಇದ್ದು, ಅವರೆಲ್ಲರ ಬಾಗಾಯ್ತು ಒಣಗಿದರೂ ಪರವಾಗಿಲ್ಲ; ಕುಡಿವ ನೀರಿ[illegible] ಬಾವಿಗಳು ಒಣಗಿದರೂ ಪರವಾಗಿಲ್ಲ; ಒ[illegible] ದೂವರೆ ಮೈಲಿ ದೂರವಿರುವ ನನ್ನ 2[illegible] ಗುಂಟೆಗೆ ನೀರಿದ್ದರೆ ಸಾಕು ಎನ್ನುವುದಾದ[illegible] ಅದಕ್ಕೆ ಉತ್ತರ ಬೇಕಿಲ್ಲ.

— **ಎಚ್. ವೈ. ಸೀತಾರಾಮ ಭಟ್ಟ**
ಹಾಲ್ಮುತ್ತೂರು

## ಮಧ್ಯಾಂತರ ಮಂಡಲ ಪಂಚಾಯ್ತಿ ಕಾರ್ಯಾಲಯ

**ಕೊಪ್ಪ-ಚಿಕ್ಕಮಗಳೂರು ಜಿಲ್ಲೆ**

**1990-91ನೇ ಸಾಲಿನ**

### ಲೀಸ್ ಆಕ್ಷನ್ ನೋಟಿಫಿಕೇಶನ್

ನಂ. ಎಸ್.ಸಿ. (1) ಪಿ.ಆರ್/89-90 ದಿ. 3.1.90 ಮತ್ತು ದಿ. 3.2.90

**ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಮಧ್ಯಾಂತರ ಮಂಡಲ ಪಂಚಾಯ್ತಿಗೆ ಸೇರಿರುವ ಬಸ್‌ಸ್ಟಾಂಡ್ ಹೋಟೆಲ್ ಕಟ್ಟಡದಲ್ಲಿ ದಿ. 1-4-1990ರಿಂದ 31-3-1993ರ ವರೆಗಿನ 3 ವರ್ಷಗಳ ಅವಧಿಗೆ ಹೋಟೆಲು ನಡೆಸುವ ಹಕ್ಕನ್ನು ಮಾಹೆಯಾನ ಕಂತಿನ ರೂಪದಲ್ಲಿ 4-3-90ರಂದು ಭಾನುವಾರ ಬೆಳಿಗ್ಗೆ 11 ಗಂಟೆಗೆ ಮಧ್ಯಾಂತರ ಮಂಡಲ ಪಂಚಾಯ್ತಿ ಕಾರ್ಯಾಲಯದಲ್ಲಿ ಬಹಿರಂಗ ಲೀಸ್ ಆಕ್ಷನ್ ಮೂಲಕ ಮಧ್ಯಾಂತರ ಮಂಡಲ ಪಂಚಾಯ್ತಿ ಪ್ರಧಾನರು ಅಥವಾ ಕಾರ್ಯದರ್ಶಿಯವರಿಂದ ನಿಗದಿತ ಷರತ್ತಿಗೊಳಪಟ್ಟು ವಿಲೇವಾರಿ ಮಾಡಲಾಗುವುದು.**

ಅದೇ ದಿನ ಅದೇ ಸಮಯಕ್ಕೆ ಸರಿಯಾಗಿ, ಮಧ್ಯಾಂತರ ಮಂಡಲ ಪಂಚಾಯ್ತಿಗೆ ಸೇರಿದ ಈ ಕೆಳಕಂಡ ಬಾಬುಗಳನ್ನು ದಿನಾಂಕ **1-4-90ರಿಂದ 31-3-91ರ** ವರೆಗಿನ 1 ವರ್ಷದ ಕಾಲಾವಧಿಗೆ ಅದೇ ರೀತಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು. ಇಷ್ಟವುಳ್ಳವರು ಬಹಿರಂಗ ಲೀಸ್ ಆಕ್ಷನ್‌ನಲ್ಲಿ ಭಾಗವಹಿಸಿ ಪಡೆಯಬಹುದು.

**ಹರಾಜು ಮಾಡುವ ಬಾಬುಗಳು :**

1. ಸ್ಲಾಟರ್ ಹೌಸ್‌ನಲ್ಲಿ ಆಡು ಮತ್ತು ಕುರಿಗಳನ್ನು ಕಡಿಯುವ ಮತ್ತು ಅವುಗಳ ಮಾಂಸವನ್ನು ಮಾರಾಟ ಮಾಡುವ ಹಕ್ಕುಗಳು—ಮಾರ್ಕೆಟ್ ರಸ್ತೆಯಲ್ಲಿರುವ ಎರಡು ಮಾಂಸದ ಅಂಗಡಿಗಳು.
2. 10 ಮೀನು ಮಾರುವ ಹೊಸ ಕಟ್ಟಡದ ಸ್ಟಾಲುಗಳು.
3. ಮಧ್ಯಾಂತರ ಮಂಡಲ ಪಂಚಾಯ್ತಿಗೆ ಸೇರಿರುವ ಸಂತೆಯಲ್ಲಿ ಸಂತೆ ಸುಂಕ ವಸೂಲಿ ಮಾಡುವ ಹಕ್ಕು.
4. ಮಾರ್ಕೆಟ್ ರಸ್ತೆ ಎಡಭಾಗದಲ್ಲಿರುವ 1ರಿಂದ 26 ಅಕ್ಕಿ ಮಳಿಗೆಗಳು.
5. ಹನ್ನೊಂದು ತೆಂಗಿನ ಮರದಲ್ಲಿ ಫಸಲನ್ನು ಕೀಳುವ ಹಕ್ಕು.
6. 6 ಹಣ್ಣಿನಂಗಡಿ ಮಳಿಗೆಗಳು.

**ಷರತ್ತುಗಳಿಗೆ ಮಧ್ಯಾಂತರ ಮಂಡಲ ಪಂಚಾಯ್ತಿ ಕಾರ್ಯಾಲಯದಲ್ಲಿ ಕಛೇರಿ ವೇಳೆಯಲ್ಲಿ ವಿಚಾರಿಸಿ ಪಡೆಯಬಹುದು.**

(ಸಹಿ) **ಆರ್. ಗಣೇಶ್,**
ಕಾರ್ಯದರ್ಶಿಗಳು

(ಸಹಿ) **ಕೆ.ವಿ. ಮಂಜುನಾಥ ಶೆಟ್ಟಿ,**
ಪ್ರಧಾನರು,

ಮಧ್ಯಾಂತರ ಮಂಡಲ ಪಂಚಾಯ್ತಿ, ಕೊಪ್ಪ.



## DEPARTMENT OF TELECOMMUNICATIONS

**OFFICE OF THE DIVISIONAL OFFICER TELECOM**

**CHICKMAGALUR - 577101**

PROVIDING VITAL INFRASTRUCTURE TO NATION - BUILDING

On Commissioning of New Electronic Telephon[e] Exchange at SRINGERI without STD/ISD facilities, th[e] present telephone numbers at Sringeri will be change[d] to new numbers with effect from 25 02.90 at 9.0[0] A M. The illustration is as under :

| PRESENT NUMBER | NEW NUMBER |
|---|---|
| 10 will become | 2110 |
| 99 will become | 2199 |

All old numbers become new numbers by pre[fixing] 21 except 98 which wil l have 2108 as ne[w] number.

| | Present No. | New Numb[er] |
|---|---|---|
| Trunk booking code will be | 0 | 18 |
| Local Enquiries | 20 | 2120 |
| Local Complaints | 20 | 2198 |

Sd/-
Divisional Officer Telec[om]
Chickmagalur - 57710[1]

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು : ದೀಪಟಿಗೆ ಅಚ್ಚುಕೂಟ, ಕೊಪ್ಪ.